## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 321 (348) |
| 2 | ಸದಸ್ಯರ ಹೆಸರು | : | ಶ್ರೀ ಸಿ.ಎನ್. ಮಂಜೇಗೌಡ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 18.02.2022 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನಾ ಸಚಿವರು. |

****

| | ಪ್ರಶ್ನೆ | ಉತ್ತರ |
|---|---|---|
| (ಅ) | ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ 2021-22ನೇ ಸಾಲಿಗೆ ನೀಡಿರುವ ಅನುದಾನವೆಷ್ಟು; ಬಾಕಿ ನೀಡಬೇಕಾಗಿರುವ ಅನುದಾನವನ್ನು ಯಾವಾಗ ನೀಡಲಾಗುವುದು; (ವಿವರ ನೀಡುವುದು) | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2021-22ನೇ ಸಾಲಿನಲ್ಲಿ ಪ್ರತಿ ಕ್ಷೇತ್ರಕ್ಕೆ ರೂ.2.00 ಕೋಟಿಗಳ ಅನುದಾನವನ್ನು ನಿಗದಿಪಡಿಸಲಾಗಿದ್ದು, ಇದರಂತೆ ರೂ.2.00 ಕೋಟಿಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ. |
| (ಆ) | 2017-18, 2018-19, 2019-20 ಹಾಗೂ 2020-21ನೇ ಸಾಲಿನ ಶಾಸಕರ ಪ್ರದೇಶಾಭಿವೃದ್ಧಿ ಅನುದಾನವನ್ನು ಬಳಕೆ ಮಾಡದೆ ವಿಳಂಬ ಮಾಡುತ್ತಿರುವುದರಿಂದ ಸರ್ಕಾರ ಹಿಂಪಡೆದಿರುವುದು ನಿಜವೇ; | ಹೌದು<br>ಕೆಲ್ಯಾಡ್ಸ್ ಮಾರ್ಗಸೂಚಿ ಕಂಡಿಕೆ-4.1 ರನ್ವಯ "ಜಿಲ್ಲಾಧಿಕಾರಿಗಳಿಗೆ ಅನುಷ್ಠಾನದಲ್ಲಿರುವ ಕಾಮಗಾರಿಗಳ ವಾಸ್ತವಿಕ ಮತ್ತು ಹಣಕಾಸು ಪ್ರಗತಿಯ ಆಧಾರದ ಮೇಲೆ ಹಾಗೂ ಕಾಮಗಾರಿಗಳಿಗೆ ಇನ್ನೂ ಹೆಚ್ಚಿನ ನಿಧಿಗಳ ಅಗತ್ಯತೆಯ ಆಧಾರದ ಮೇಲೆ ನಿಧಿಯನ್ನು ವರ್ಷಕ್ಕೆ ಎರಡು ಕಂತುಗಳಲ್ಲಿ ಬಿಡುಗಡೆ ಮಾಡತಕ್ಕದ್ದು. ನಿರ್ದಿಷ್ಟ ವರ್ಷದಲ್ಲಿ ಬಿಡುಗಡೆಯಾದ ನಿಧಿಗಳ ಪೈಕಿ ಬಳಕೆಯಾಗದೆ ಉಳಿದ ಹಣ ಜಿಲ್ಲಾಧಿಕಾರಿಗಳ ಬಳಿ ಇದ್ದರೆ, ಅದನ್ನು ಮುಂದಿನ ವರ್ಷಕ್ಕೆ ಮಾತ್ರ ಉಪಯೋಗಿಸಬಹುದಾಗಿದೆ. ಆ ಮೊತ್ತವು ಮುಂದಿನ ವರ್ಷದ ಕೊನೆಯಲ್ಲಿ ಖರ್ಚಾಗದೇ ಉಳಿದರೆ ಆ ಮೊತ್ತವನ್ನು ರದ್ದುಪಡಿಸಲಾಗುವುದು. ಅಲ್ಲದೆ, ಆ ವರ್ಷದಲ್ಲಿ ನಿಧಿಗಳನ್ನು ಕ್ಲೇಮು ಮಾಡದಿದ್ದಲ್ಲಿ, ಹಣಕಾಸು ವರ್ಷದ ಕೊನೆಯಲ್ಲಿ ಹಂಚಿಕೆಯನ್ನು ರದ್ದುಪಡಿಸತಕ್ಕದ್ದು ಎಂದು ದಿನಾಂಕ:13.08.2021 ರ ಸುತ್ತೋಲೆಯಲ್ಲಿ ಈಗಾಗಲೇ ಎಲ್ಲಾ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿದೆ. |

...2

| | ಪ್ರಶ್ನೆ | ಉತ್ತರ |
|---|---|---|
| (ಇ) | ಹಾಗಿದ್ದಲ್ಲಿ, ಶಾಸಕರುಗಳಿಗೆ ಅವರ ಕ್ಷೇತ್ರದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸಮಸ್ಯೆಯಾಗಿರುವುದು ಸರ್ಕಾರ ಗಮನಿಸಿದೆಯೇ; | ಇಲ್ಲ. |
| (ಈ) | ಕಳೆದ ಅಧಿವೇಶನದಲ್ಲಿ ಸರ್ಕಾರ ನೀಡಿದ ಭರವಸೆಯಂತೆ ಉಪಯೋಗಿಸಿಕೊಳ್ಳದೆ ಇರುವ ಅನುದಾನವನ್ನು ಹಿಂಪಡೆದಿರುವ ಆದೇಶವನ್ನು ರದ್ದುಪಡಿಸಲು ಇನ್ನು ಎಷ್ಟು ದಿನಗಳು ಬೇಕಾಗುವುದು? (ಸ್ಪಷ್ಟವಾದ ವಿವರ ನೀಡುವುದು) | ದಿನಾಂಕ:27.01.2022ರಂದು ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2018ರ ಹಿಂದಿನ ವರ್ಷಗಳಲ್ಲಿ ಪ್ರಾರಂಭವಾಗದೇ ಇರುವ ಕಾಮಗಾರಿಗಳಿಗೆ ನಿಗದಿ ಪಡಿಸಲಾದ ಅನುದಾನವನ್ನು ರಾಜ್ಯ ಮಟ್ಟದ ಕೇಂದ್ರೀಕೃತ ಉಳಿತಾಯ ಖಾತೆಗೆ ಹಿಂಪಡೆಯಲು ನಿರ್ಧರಿಸಲಾಗಿದೆ. |

ಸಂಖ್ಯೆ: ಪಿಡಿಎಸ್ 16 ಕೆಎಲ್ಎಸ್ 2022

(ಮುನಿರತ್ನ)
ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು.